

# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 251 (1750)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ. ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಪ್ರವಾಸೋದ್ಯಮ ಮತ್ತು ಪರಿಸರ ಮತ್ತು ಜೀವಿ ಪರಿಸ್ಥಿತಿ ಸಚಿವರು

ವಿಷಯ : ಡೈರಿ ಮತ್ತು ಇದಕ್ಕೆ ಸಂಬಂಧಪಟ್ಟ ಕೈಗಾರಿಕೆಗ ಬಗ್ಗೆ

(ಅ) ಡೈರಿ ಮತ್ತು ಇದಕ್ಕೆ ಸಂಬಂಧಪಟ್ಟ ಕೈಗಾರಿಕೆಗಳಲ್ಲಿ ಉತ್ಪಾದನೆಯಾಗುವ ತ್ಯಾಜ್ಯ ವಸ್ತುಗಳು ಯಾವುವು; ಈ ತ್ಯಾಜ್ಯವು ಯಾವ ರಾಸಾಯನಿಕಗಳನ್ನು ಒಳಗೊಂಡಿರುತ್ತದೆ; ಈ ತ್ಯಾಜ್ಯವು ಮನುಷ್ಯ ಮತ್ತು ಪ್ರಾಣಿ ಪಕ್ಷಿಗಳಿಗೆ ಅಪಾಯಕಾರಿಯೇ; ಈ ತ್ಯಾಜ್ಯವನ್ನು ವಿಲೇವಾರಿ ಮಾಡುವ ವಿಧಾನಗಳು ಯಾವುವು; (ವಿವರ ನೀಡುವುದು)

(ಆ) ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಇಂತಹ ಕೈಗಾರಿಕೆಗಳ ತಪಾಸಣೆಯನ್ನು ಕಾಲ ಕಾಲಕ್ಕೆ ನಡೆಸಲಾಗುತ್ತಿದೆಯೇ; ಇದ್ದಲ್ಲಿ, ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕಿನ ಶೆಟ್ಟಿಹಳ್ಳಿ ಗ್ರಾಮದಲ್ಲಿ ಕಾರ್ಯನಿರ್ವಹಿಸುತ್ತಿರುವ ನಂದಿನಿ ಹೈಟೆಕ್ ಉತ್ಪನ್ನ ಘಟಕದ (Nandini HiTech Product Plant) ತಪಾಸಣೆ ನಡೆಸಲಾಗಿದೆಯೇ ನಡೆಸಿದ್ದಲ್ಲಿ, ಈ ಘಟಕದಲ್ಲಿ ಉತ್ಪತ್ತಿಯಾಗುತ್ತಿರುವ ತ್ಯಾಜ್ಯ ವಸ್ತುಗಳು ಮತ್ತು ರಾಸಾಯನಿಕಗಳು ಯಾವುವು; ಈ ತ್ಯಾಜ್ಯವನ್ನು ಯಾವ ರೀತಿ ವಿಲೇವಾರಿ ಮಾಡಲಾಗುತ್ತಿದೆ; (ತಪಾಸಣಾ ವರದಿ ಸಹಿತ ವಿವರ ನೀಡುವುದು)

(ಇ) ಈ ಘಟಕದಿಂದ ಬಿಡುಗಡೆಯಾಗುತ್ತಿರುವ ತ್ಯಾಜ್ಯ ಮತ್ತು ಇತರೆ ರಾಸಾಯನಿಕಗಳನ್ನು ವೈಜ್ಞಾನಿಕವಾಗಿ ಸಂಸ್ಕರಣೆ ಮಾಡದೆ ಸಮೀಪದ ಹಳ್ಳ-ಕೊಳ್ಳ-ಕೆರೆಗಳಿಗೆ ಹರಿಸುತ್ತಿರುವುದರಿಂದ ಈ ಘಟಕದ ಸುತ್ತಮುತ್ತಲಿನ ಹಲವಾರು ಗ್ರಾಮಸ್ಥರು ಮತ್ತು ಪ್ರಾಣಿ ಪಕ್ಷಿಗಳು ಅಸ್ವಸ್ಥಗೊಳ್ಳುತ್ತಿರುವ ಪ್ರಕರಣಗಳು ಬೆಳಕಿಗೆ ಬಂದಿದ್ದು, ಈ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಂಬಂಧ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು)